

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 793 (1054)
ಸದಸ್ಯರ ಹೆಸರು : ಶ್ರೀ. ಕೆ. ಪ್ರತಾಪಚಂದ್ರ ಶೆಟ್ಟಿ
ಉತ್ತರಿಸುವ ದಿನಾಂಕ : 10.03.2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಯಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದ ಬಳಕೆಯಲ್ಲಿಲ್ಲದ ಹಾಸ್ಟೆಲ್ ವಸತಿಶಾಲೆಗಳ ಸಂಖ್ಯೆ ಎಷ್ಟು; ಅವು ಯಾವುವು; (ತಾಲ್ಲೂಕುವಾರು ಮಾಹಿತಿ ನೀಡುವುದು) | ಉಡುಪಿ ಜಿಲ್ಲೆಯಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಬಳಕೆಯಲ್ಲಿ ಇಲ್ಲದ ಹಾಸ್ಟೆಲ್ ಮತ್ತು ವಸತಿ ಶಾಲೆಗಳು (1 ರಿಂದ 5ನೇ ತರಗತಿ) ಯಾವುದೂ ಇರುವುದಿಲ್ಲ.<br><br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಉಡುಪಿ ಜಿಲ್ಲೆ, ಹೆಬ್ರಿ ತಾಲ್ಲೂಕು, ಆರ್ಡಿ ಗ್ರಾಮದಲ್ಲಿ 1992 ರಲ್ಲಿ ಆಶ್ರಮ ಶಾಲೆಯನ್ನು ಪ್ರಾರಂಭಿಸಲಾಗಿದ್ದು, ಸದರಿ ಆಶ್ರಮ ಶಾಲೆಯನ್ನು ವಿದ್ಯಾರ್ಥಿಗಳ ದಾಖಲಾತಿ ಸಂಖ್ಯೆ ಕಡಿಮೆಯಾದ್ದರಿಂದ 2007-08ನೇ ಸಾಲಿನಲ್ಲಿ ಮುಚ್ಚಲಾಗಿರುತ್ತದೆ.<br><br>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ ಉಡುಪಿ ಜಿಲ್ಲೆಯಲ್ಲಿ ಒಟ್ಟು 09 ವಸತಿ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ. ಅವುಗಳಲ್ಲಿ ಬಳಕೆಯಲ್ಲಿಲ್ಲದ ಯಾವುದೇ ವಸತಿ ಶಾಲೆಗಳಿರುವುದಿಲ್ಲ. |
| ಆ) | ಉಡುಪಿ ಜಿಲ್ಲೆ ಹೆಬ್ರಿ ತಾಲ್ಲೂಕಿನ ಅಲ್ಬಾಡಿ ಗ್ರಾಮದ ಆರ್ಡಿಯಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸೇರಿದ ಆಶ್ರಮ ಶಾಲೆಯನ್ನು ಯಾವಾಗ ಪ್ರಾರಂಭಿಸಲಾಯಿತು; ಇಲ್ಲಿಯವರೆಗೆ ಆ ಶಾಲೆಗೆ ಯಾವ ಯಾವ ಉದ್ದೇಶಗಳಿಗೆ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; ಎಷ್ಟು ವೆಚ್ಚ ಮಾಡಲಾಗಿದೆ; (ವರ್ಷವಾರು ಮಾಹಿತಿ ನೀಡುವುದು) ಈ ಶಾಲೆಯನ್ನು ಯಾವಾಗ ಮುಚ್ಚಲಾಯಿತು; ಯಾವ ಕಾರಣಕ್ಕಾಗಿ ಮುಚ್ಚಲಾಯಿತು; | ಉಡುಪಿ ಜಿಲ್ಲೆ, ಹೆಬ್ರಿ ತಾಲ್ಲೂಕು ಅಲ್ಬಾಡಿ ಗ್ರಾಮದ ಆರ್ಡಿಯಲ್ಲಿ 1992ರಲ್ಲಿ ಆಶ್ರಮ ಶಾಲೆಯನ್ನು ಪ್ರಾರಂಭಿಸಲಾಗಿರುತ್ತದೆ. ಈ ಆಶ್ರಮ ಶಾಲೆಗೆ ವೇತನ ಹಾಗೂ ವೇತನೇತರ ಉದ್ದೇಶಗಳಿಗಾಗಿ ಒಟ್ಟು ರೂ.14,63,761/-ಗಳನ್ನು ಬಿಡುಗಡೆ ಮಾಡಿ ವೆಚ್ಚ ಮಾಡಲಾಗಿದೆ. ವರ್ಷವಾರು ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಿದೆ. ಸದರಿ ಆಶ್ರಮ ಶಾಲೆಯನ್ನು ವಿದ್ಯಾರ್ಥಿಗಳ ದಾಖಲಾತಿ ಸಂಖ್ಯೆ ಕಡಿಮೆಯಾಗಿದ್ದರಿಂದ 2007-08ನೇ ಸಾಲಿನಲ್ಲಿ ಮುಚ್ಚಲಾಗಿರುತ್ತದೆ. |
| ಇ) | ಸದರಿ ಶಾಲೆ ಮುಚ್ಚಿದ ನಂತರ ಶಾಲೆಯ ನಿರ್ವಹಣೆಯನ್ನು ಇಲಾಖೆ ವತಿಯಿಂದ ಮಾಡಲಾಗಿದೆಯೇ; ಇಲ್ಲದಿದ್ದಲ್ಲಿ ಕಾರಣವೇನು; ಸದರಿ ಶಾಲೆಯನ್ನು ಬೇರೆ ಉದ್ದೇಶಕ್ಕೆ ಬಳಸಲು ಇತರೆ ಇಲಾಖೆಗೆ ಹಸ್ತಾಂತರ ಮಾಡಲಾಗಿದೆಯೇ? | ಸದರಿ ಆಶ್ರಮ ಶಾಲೆಯ ಕಟ್ಟಡ ಹಾಗೂ ಕುಡಿಯುವ ನೀರಿನ ಬಾವಿಯನ್ನು ಉಡುಪಿ ಜಿಲ್ಲೆ, ಹೆಬ್ರಿ ತಾಲ್ಲೂಕು ಪಂಚಾಯಿತಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ. ಆದರೆ ಕಟ್ಟಡವು ದುರಸ್ಥಿಯಲ್ಲಿರುವುದರಿಂದ ಕಟ್ಟಡ ಹಾಗೂ ಕುಡಿಯುವ ನೀರಿನ ಬಾವಿಯು ಪಂಚಾಯತ್‌ಗೆ ಅಗತ್ಯವಿಲ್ಲವೆಂದು ಪಂಚಾಯತ್ ಅಭಿವೃದ್ಧಿ ಅಧಿಕಾರಿಯು ತಿಳಿಸಿರುತ್ತಾರೆ. ಪ್ರಸ್ತುತ ಆಶ್ರಮ ಶಾಲೆಯ ಕಟ್ಟಡವು ದುರಸ್ಥಿಯಲ್ಲಿರುವುದರಿಂದ ಇಲಾಖೆಯ ವಶದಲ್ಲಿರುತ್ತದೆ. |

ಸಕಇ 93 ಪಕವಿ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

## ಚುಕ್ಕೆ ಗುರುತಿಲ್ಲದ ಪ್ರ.ಸಂ:793 (1054) ಕ್ಕೆ ಅನುಬಂಧ

ಅನುಬಂಧ

| ಕ್ರ.ಸಂ | ವರ್ಷ | ವೇತನ | ವೇತನೇತರ | ಒಟ್ಟು |
|---|---|---|---|---|
| 1 | 1992-93 | 0 | 7996 | 7996 |
| 2 | 1993-94 | 9536 | 8544 | 18080 |
| 3 | 1994-95 | 14700 | 9372 | 24072 |
| 4 | 1995-96 | 26432 | 11096 | 37528 |
| 5 | 1996-97 | 18382 | 17304 | 35686 |
| 6 | 1997-98 | 26144 | 23150 | 49294 |
| 7 | 1998-99 | 27856 | 45886 | 73742 |
| 8 | 1999-2000 | 28436 | 49917 | 78353 |
| 9 | 2000-01 | 50430 | 72187 | 122617 |
| 10 | 2001-02 | 73256 | 45006 | 118262 |
| 11 | 2002-03 | 80177 | 57800 | 137977 |
| 12 | 2003-04 | 85320 | 60500 | 145820 |
| 13 | 2004-05 | 90425 | 63425 | 153850 |
| 14 | 2005-06 | 85324 | 65700 | 151024 |
| 15 | 2006-07 | 80420 | 80320 | 160740 |
| 16 | 2007-08 | 78320 | 70400 | 148720 |
| ಒಟ್ಟು | | 775158 | 688603 | 1463761 |